# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1 | ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 266 |
| 2 | ಸದಸ್ಯರ ಹೆಸರು | ಶ್ರೀ ಸುನೀಲ್ ಗೌಡ ಬಸನಗೌಡ ಪಾಟೀಲ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| 3 | ಉತ್ತರಿಸಬೇಕಾದ ದಿನಾಂಕ | 15.12.2021 |
| 4 | ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರೈತರ ಜಮೀನುಗಳನ್ನು ಪೋಡಿ ಮಾಡದೇ ಇರುವುದರಿಂದ ರೈತರಿಗೆ ಆಗುತ್ತಿರುವ ಸಮಸ್ಯೆಗಳು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಪೋಡಿ ಮುಕ್ತ ಗ್ರಾಮ ಮಾಡಲು ಸರ್ಕಾರ ಕೈಗೊಂಡ ಕ್ರಮಗಳೇನು; | ಪೋಡಿ ಮುಕ್ತ ಗ್ರಾಮ ಯೋಜನೆಯಡಿಯಲ್ಲಿ ಆಯ್ದ ಗ್ರಾಮಗಳ ಬಹುಮಾಲೀಕತ್ವದ ಖಾಸಗಿ/ಹಿಡುವಳಿ ಜಮೀನುಗಳನ್ನು ಅಳತೆಗೆ ಒಳಪಡಿಸಿ ಏಕಮಾಲೀಕತ್ವ ಕ್ಕೆ ಪರಿವರ್ತಿಸುವ ಉದ್ದೇಶದಿಂದ ಈ ಯೋಜನೆಯನ್ನು ರಾಜ್ಯದ 224 ವಿಧಾನ ಸಭಾ ಕ್ಷೇತ್ರಗಳ ಪೈಕಿ ನಗರ ಪ್ರದೇಶದ ವಿಧಾನ ಸಭಾ ಕ್ಷೇತ್ರಗಳನ್ನು ಹೊರತುಪಡಿಸಿ, ಉಳಿದ 174 ವಿಧಾನ ಸಭಾ ಕ್ಷೇತ್ರಗಳಲ್ಲಿ ಪ್ರಾರಂಭಿಸಲಾಗಿದೆ. |

**ಪೋಡಿ ಮುಕ್ತ ಗ್ರಾಮ ಯೋಜನೆಯ ಈವರೆಗಿನ ಪ್ರಗತಿ ವರದಿ**

| ಅಳತೆ ಆಯ್ಕೆ ಮಾಡಲಾದ ಗ್ರಾಮಗಳ ಸಂಖ್ಯೆ | ಅಳತೆ ಕಾರ್ಯ ಪೂರ್ಣಗೊಂಡ ಗ್ರಾಮಗಳ ಸಂಖ್ಯೆ | ದುರಸ್ತಿ ಕಾರ್ಯ ಪೂರ್ಣಗೊಂಡಿರುವ ಗ್ರಾಮಗಳ ಸಂಖ್ಯೆ | ಇಂಡೀಕರಣ ಕಾರ್ಯ ಪೂರ್ಣ ಗೊಂಡಿರುವ ಗ್ರಾಮಗಳ ಸಂಖ್ಯೆ |
|---|---|---|---|
| 16723 | 16454 | 15905 | 15018 |
| | ಇಲ್ಲಿಯವರೆಗೆ ಅಳತೆ ಮಾಡಿದ ಒಟ್ಟು ಬ್ಲಾಕ್ ಗಳ ಸಂಖ್ಯೆ | ಇಲ್ಲಿಯವರೆಗೆ ದುರಸ್ತಿಯಾದ ಒಟ್ಟು ಬ್ಲಾಕ್ ಗಳ ಸಂಖ್ಯೆ | ಇಲ್ಲಿಯವರೆಗೆ ಇಂಡೀಕರಣವಾದ ಒಟ್ಟು ಬ್ಲಾಕ್ ಗಳ ಸಂಖ್ಯೆ |
| | 2144534 | 2099153 | 2033857 |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಆ) | ರಾಜ್ಯದ ಎಲ್ಲ ಗ್ರಾಮಗಳಲ್ಲಿ ಜಮೀನಿಗೆ ಸಂಬಂಧಿಸಿದಂತೆ ರೈತರನ್ನು ಪೋಡಿ ವ್ಯವಸ್ಥೆಯಿಂದ ಮುಕ್ತ ಮಾಡಲು ಪೋಡಿ ಗ್ರಾಮಗಳನ್ನು ಸರ್ವೆ ಮಾಡಿ ರೈತರಿಗೆ ಅನುಕೂಲ ಮಾಡಿಕೊಡುವುದಾಗಿ ಸರ್ಕಾರ ತಿಳಿಸಿದ್ದು, ಇಲ್ಲಿಯವರೆಗೆ ಎಷ್ಟು ಗ್ರಾಮಗಳನ್ನು ಪೋಡಿ ಮುಕ್ತ ಗ್ರಾಮ | ಪೋಡಿ ಮುಕ್ತ ಗ್ರಾಮ ಯೋಜನೆಯಡಿಯಲ್ಲಿ ಈವರೆಗೆ ಒಟ್ಟು 16,454 ಗ್ರಾಮಗಳಲ್ಲಿ 21,44,534 ಬ್ಲಾಕ್ ಗಳ ಅಳತೆ ಕಾರ್ಯ ಪೂರೈಸಿ, 20,33,857 ಏಕವ್ಯಕ್ತಿ ಪಹಣಿಗಳನ್ನು ಸೃಜಿಸುವ ಮೂಲಕ ಪೋಡಿ ಮುಕ್ತ ಗ್ರಾಮವನ್ನಾಗಿ ಮಾಡಲಾಗಿದೆ.<br>ಸಾರ್ವಜನಿಕರು ದೈನಂದಿನ ಕೆಲಸಗಳಿಗಾಗಿ ಅಳತೆ ಕೋರಿ ಸಲ್ಲಿಸುವ 11ಇ, ಅನ್ಯ ಕ್ರಾಂತ, ತತ್ಕಾಲ್ ಪೋಡಿ, ಹದ್ದುಬಸ್ತು, ಇತ್ಯಾದಿ ಅರ್ಜಿಗಳ ಹಾಗೂ ತಾಲ್ಲೂಕುಗಳಲ್ಲಿ ಬರುವ ಸ್ಥಳೀಯ ತೊಂದರೆಗಳ ಬಗ್ಗೆ ಅಳತೆ ಕಾರ್ಯಗಳಿಗೆ ಮೊದಲ ಆದ್ಯತೆ ನೀಡಿ, ಅಳತೆ ಕಾರ್ಯಗಳನ್ನು ಪೂರೈಸಲು ಅವಶ್ಯಕವಾದ ಭೂಮಾಪಕರನ್ನು ಹೊರತುಪಡಿಸಿ ಉಳಿದ |

| | | |
|---|---|---|
| | ಗಳನ್ನಾಗಿ ಮಾಡ ಲಾಗಿದೆ; ಈ ಯೋಜನೆಯನ್ನು ಕೈಗೆತ್ತಿಕೊಳ್ಳುವಲ್ಲಿ ವಿಳಂಬವಾಗಲು ಕಾರಣಗಳೇನು; | ಭೂಮಾಪಕರುಗಳನ್ನು ಬಳಸಿಕೊಂಡು ಪೋಡಿಮುಕ್ತ ಗ್ರಾಮ ಅಭಿಯಾನ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಸಾರ್ವಜನಿಕರ ದೈನಂದಿನ ಕೆಲಸಗಳಿಗೆ ತೊಂದರೆಯಾಗದಂತೆ ಸರ್ಕಾರಿ ಮತ್ತು ಪರವಾನಗಿ ಭೂಮಾಪಕರ ಲಭ್ಯತೆಗೆ ಅನುಗುಣವಾಗಿ ಬಾಕಿ ಗ್ರಾಮಗಳನ್ನು ವಿಧಾನ ಸಭಾ ಕ್ಷೇತ್ರವಾರು ಹಂತಹಂತವಾಗಿ ಈ ಯೋಜನೆಯಡಿ ಅಳತೆಗೆ ಆಯ್ಕೆ ಮಾಡಿಕೊಂಡು ಪೋಡಿ ಮುಕ್ತಗೊಳಿಸಲು ಕ್ರಮಕೈಗೊಳ್ಳ ಲಾಗುತ್ತಿದೆ. |
| ಇ) | ಯಾವ ಕಾಲಮಿತಿಗೆ ಒಳಪಟ್ಟು ರಾಜ್ಯ ದಲ್ಲಿನ ಗ್ರಾಮಗಳನ್ನು ಪೋಡಿ ಮುಕ್ತ ಗ್ರಾಮ ಗಳನ್ನಾಗಿ ಮಾಡ ಲಾಗುವುದು; (ವಿವರಿಸುವುದು) | |
| ಈ) | ಪೋಡಿ ಮುಕ್ತ ಗ್ರಾಮ ಗಳನ್ನು ಮಾಡುವ ಯೋಜನೆಯ ಬಗ್ಗೆ ಸರ್ಕಾರದ ಸ್ಪಷ್ಟ ನಿಲುವೇನು? (ವಿವರ ನೀಡುವುದು) | |

**ಸಂಖ್ಯೆ: ಕಂಇ 203 ಎಸ್‌ಎಸ್‌ಸಿ 2021**

**(ಆರ್.ಅಶೋಕ)**
ಕಂದಾಯ ಸಚಿವರು